मायाविनं निहत्य खरतरभुजपरिघविघट्टितबिलवदनपिधानस्तरसा रसातलात्पुरं प्रविष्टोऽतीव रुष्टः प्रभ्रष्टाशयं बहुशः प्रणिपतन्तं प्रतिपादितयाथातथ्यममुं जनं निरागसमपि नगरान्निरकासयत् । तदनु तदनुधावनात् कान्दीशीकस्य मम पर्वतेऽस्मिन्नकुतोभयसञ्चारकारणमाकर्ण्यताम् । पुरैकदा वालिनमतनुभुजबलमखिलकुलाचलचालनचतुरं चतुरर्णवलङ्घनजङ्घालं दुन्दुभिर्नाम वृन्दारकारिलुलायकायः परिभूय समरे समतिष्ठत । तदनु निहतस्य तस्य शरीरं वाली बलावलेपेन सकललोकविलय[3]विलोललुलितातुलबलपवनचलितलघुतूललीलया मतङ्गाश्रमक्षितौ क्षिप्रमक्षिपत् ।

[3] विलोलदनिलबलचलित....

Then Sugriva, being asked the cause of Vālin's hostility by Rāma, in whom steadfastness of mind was instilled by Lakṣmaṇa's words of persuasion, said to him thus. — Formerly a demon named Māyāvin, brother of Dundubhi, having held up in a battle Vālin who is a Sun to the whole mass of darkness in the form of the entire host of his enemies, (and then,) his courage failing him at Vālin's might, fled into an abyss of the city of the serpents (in the nether world). Thereupon, by that proud Vālin wearing a gold necklace, as he was entering into the cave, I was ordered to guard the mouth of that cave; I, awaiting the time of his emergence, beholding, after the lapse of a long time, a stream of blood bubbling forth laden with flesh, concluded that my brother had been killed. Thereafter, having shut the mouth of the cave with a big rock of stone and having, on my part, offered unto him libations of water, shedding tears, I reached Kiskindhā, blinded by grief. Then, after I was

crowned king by the ministers to whom the news came-to be known, Vālin, having killed Māyāvin and having broke open the (rock-) shutter of the cave-mouth with his mighty bolt-like arms, came out of the nether world in haste and entered the city, grew wild and expelled me out of the city although I was not at fault;—me, who knew not what to do, who prostrated before him several times and explained to him the truth. Since then, to me afraid of being pursued by him, there is no fear from any one while moving about on this mountain, the reason for which, please hear. In olden days, one day, a demon named Dundubhi of a buffalo's form attacked and stood to fight with Vālin whose strength of arms was no small, who was capable of shaking all the *kula* mountains even, and was the swiftest in crossing all the four oceans. Then in his pride of strength, Vālin threw off very soon the body of the demon killed by him into the yard of the hermitage of Mataṅga, with as little concern as in the case of light cotton moved by a tempest blowing with a matchless force, raging more and more at the deluge of the whole world.

ತತಃ=ಬಳಿಕ ಸೌಮಿತ್ರಿ-ಭಣಿತ-ನಿರ್ಬಂಧ-ಸಂಧುಕ್ಷಿತ-ಧೈರ್ಯೇಣ= ಲಕ್ಷ್ಮಣನ ಮಾತುಗಳ ನಿರ್ಬಂಧದಿಂದ ಕೂಡಿಸಲ್ಪಲ್ಪ ಧೈರ್ಯವುಳ್ಳ ರಾಮೇಣ = ಶ್ರೀರಾಮನಿಂದ ಅನುಯುಕ್ತಃ = ಕೇಳಲ್ಪಟ್ಟವನಾಗಿ ಭಾನುಸೂನುಃ = ಸೂರ್ಯಪುತ್ರನಾದ ಸುಗ್ರೀವನು ವಾಲಿವೈರಕಾರಣಂ = ವಾಲಿಯ ದ್ವೇಷಕ್ಕೆ ಕಾರಣವನ್ನು ಇತ್ಥಂ=ಈ ರೀತಿ ಅಕಥಯತ್=ಹೇಳಿದನು.—ಪುರಾ=ಹಿಂದೆ ನಿಖಿಲ-ರಿಪುಕುಲ-[1]ತಿಮಿರನಿಚಯ-ಮರೀಚಿಮಾಲಿನಂ = ಸಮಸ್ತ ಶತ್ರು ಮಂಡಲವೆಂಬ[1] ಅಂಧಕಾರ ಸಮೂಹಕ್ಕೂ ಸೂರ್ಯನಾಗಿದ್ದ ವಾಲಿನಂ=ವಾಲಿ ಯನ್ನು ದುಂದುಭೇಃ=ದುಂದುಭಿಯ ಭ್ರಾತಾ=ಅಣ್ಣನಾದ ಮಾಯಾವೀ ನಾಮ = ಮಾಯಾವಿಯೆಂಬ ಹೆಸರುಳ್ಳ ಕಶ್ಚನ=ಒಬ್ಬಾನೊಬ್ಬ ದಾನವಃ=

ರಾಕ್ಷಸನು ಯುದ್ಧಾಯ= ಯುದ್ಧಮಾಡುವುದಕ್ಕಾಗಿ ರುದ್ಧ್ವಾ= ತಡೆದು ತದ್‌ಬಲ-ಚಲಿತ-ಧೃತಿಃ=ಆ ವಾಲಿಯ ಬಲದಿಂದ ನೀಗಿದ ಧೈರ್ಯವುಳ್ಳವನಾಗಿ ಉರಗ-ನಗರ-ಕುಹರಂ= ಸರ್ಪಗಳ ನಗರವಾದ ಪಾತಾಳದ ಗುಹೆಯೊಳಕ್ಕೆ ಅಗಾಹತ=ಪ್ರವೇಶಿಸಿದನು. ತದನು=ಆಮೇಲೆ ಗುಹಾಂ=ಗುಹೆಯನ್ನೂ ಗಾಹಮಾನೇನ=ಪ್ರವೇಶಿಸುತ್ತಿದ್ದ ಮಾನಶಾಲಿನಾ=ಅಭಿಮಾನಶಾಲಿಯಾದ ಹೇಮಮಾಲಿನಾ=ಇಂದ್ರದತ್ತವಾದ ಚಿನ್ನದ ಸರವನ್ನು (ಸದಾ) ಧರಿಸಿದ್ದ ವಾಲಿನಾ=ವಾಲಿಯಿಂದ ಬಿಲಮುಖ-ಪಾಲನಾಯ=ಗುಹಾದ್ವಾರದ ರಕ್ಷಣೆಗಾಗಿ ನಿಹಿತಃ=ನಿಯುಕ್ತನಾಗಿ ಅಹಂ= ನಾನು ತಸ್ಯ = ಆ ವಾಲಿಯ ಉತ್ಥಾನ-ವೇಲಾಂ=ಹಿಂದಿರುಗಿಬರುವ ಸಮಯವನ್ನು ಪರಿಪಾಲಯನ್= ಕಾಯುತ್ತಾ ಇದ್ದು ಚಿರಕಾಲೇ=ತುಂಬ ದೀರ್ಘಕಾಲವು ವ್ಯತೀತೇ=ಕಳೆಯಲಾಗಿ ಫೇನಸ್ತ್ಯಾನಂ= ನೊರೆಗಟ್ಟಿದ ಮಾಂಸವಿಸ್ಮೃತಂ= ಮಾಂಸದಿಂದ ವ್ಯಾಪ್ತವಾಗಿದ್ದ ಅಸೃಕ್-ಪೂರಂ=ರಕ್ತಪ್ರವಾಹವನ್ನು ಅವೇಕ್ಷ್ಯ=ಕಂಡು ಮೇ=ನನ್ನ ಭ್ರಾತಾ=ಅಣ್ಣನಾದ ವಾಲಿಯು ನಿಹತಃ ಇತಿ=ಕೊಲ್ಲಲ್ಪಟ್ಟಿದ್ದಾನೆಂದು ನಿರಚಿನವಂ=ನಿಶ್ಚಯಿಸಿದೆನು. ತದನು=ಅನಂತರ ವಿಪುಲ+ ಉಪಲ-ಪಟಲ-[1]ಪಿಹಿತ-ಬಿಲಮುಖಃ=ವಿಸ್ತಾರವಾಗಿದ್ದ ಕಲ್ಲುಬಂಡೆಯಿಂದ ಗುಹಾದ್ವಾರವನ್ನು [1]ಮುಚ್ಚಿದವನಾಗಿ ಸ್ವಯಂ=ನಾನೂ ಉದಶ್ರುಃ=ಹೊರ ಹರಿಯುತ್ತಿದ್ದ ಕಣ್ಣೀರುಳ್ಳವನಾಗಿ ತಸ್ಮೈ=ಆ ವಾಲಿಗೆ ನೈವಾಪಂ ಉದಕಂ =ತರ್ಪಣದ ನೀರನ್ನು ದತ್ವಾ=ಕೊಟ್ಟು ಶೋಕ+ಅಂಧಃ=ಭ್ರಾತೃಶೋಕದಿಂದ ಕುರುಡನಾಗಿ (ಅಂದರೆ ಏನುಮಾಡಬೇಕೆಂಬುದನ್ನರಿಯದೆ) ಕಿಷ್ಕಿಂಧಾಂ= ಕಿಷ್ಕಿಂಧಾಪಟ್ಟಣಕ್ಕೆ ಅವ+ಆಪಂ=ಬಂದು ಸೇರಿದೆನು. ಅಥ=ಆಮೇಲೆ ವಿದಿತ ವೃತ್ತಾಂತೈಃ=ತಿಳಿಸಲ್ಪಟ್ಟ ವೃತ್ತಾಂತವುಳ್ಳವರಾದ ಅಮಾತ್ಯೈಃ= ಮಂತ್ರಿಗಳಿಂದ ಮಯಿ=ನಾನು ಅಭಿಷೇಚಿತೇ (ಸತಿ)=ಅಭಿಷಿಕ್ತನಾಗಿರಲಾಗಿ, ವಾಲೀ=ಆ ವಾಲಿಯು ಮಾಯಾವಿನಂ=ಮಾಯಾವಿ ದಾನವನನ್ನು ನಿಹತ್ಯ=ಕೊಂದು ಖರತರ-ಭುಜಪರಿಘ-ವಿಘಟ್ಟಿತ-ಬಿಲವದನ-ಪಿಧಾನಃ =ತುಂಬ ಕಠಿಣವಾದ ತನ್ನ ಭುಜಗಳೆಂಬ ಪರಿಘಾಯುಧದಿಂದ ಗುಹಾದ್ವಾರಕ್ಕೆ ಮುಚ್ಚಿದ್ದ ಕಲ್ಲುಬಂಡೆಯನ್ನು ಚೂರುಮಾಡಿದವನಾಗಿ ತರಸಾ= ವೇಗವಾಗಿ ರಸಾತಲಾತ್= ಪಾತಾಳದಿಂದ ಪುರಂ=(ಕಿಷ್ಕಿಂಧಾ)ಪಟ್ಟಣವನ್ನು

ಪ್ರವಿಷ್ಟಃ=ಪ್ರವೇಶಿಸಿದವನಾಗಿ ಅತೀವ=ತುಂಬ ರುಷ್ಟಃ=ಕೋಪಗೊಂಡವನಾಗಿ ಪ್ರಭ್ರಷ್ಟ[1]ಆಶಯಂ=(ಇವನನ್ನು ಕಂಡಕೂಡಲೇ) [1]ಬುದ್ಧಿ ನಷ್ಟಗೊಂಡಿದ್ದ (ಆದ್ದರಿಂದಲೇ) ಬಹುಶಃ=ಅನೇಕಸಲ ಪ್ರಣಿಪತಂತಂ=ನಮಸ್ಕರಿಸುತ್ತಿದ್ದ (ಮತ್ತು) ಪ್ರತಿಪಾದಿತ-ಯಾಥಾತಥ್ಯಂ=ಸತ್ಯಾಂಶವನ್ನು ವಿಶದವಾಗಿ ತಿಳಿಸಿದ ನಿರಾಗಸಂ=ತಪ್ಪಿತಸ್ಥನಲ್ಲದ ಅಮುಂ ಜನಂ=ಈ ನನ್ನನ್ನು ನಗರಾತ್=ಪಟ್ಟಣದಿಂದ ನಿರಕಾಸಯತ್ = ಹೊರಗಟ್ಟಿದನು. ತದನು=ಆಮೇಲೆ ತದ್+ಅನುಧಾವನಾತ್=ಆ ವಾಲಿಯು (ನನ್ನನ್ನು) ಅಟ್ಟಿಸಿಕೊಂಡು ಬಂದುದರಿಂದ ಕಾಂದಿಶೀಕಸ್ಯ=ಭಯದಿಂದೋಡಿದ ಮಮ=ನನಗೆ ಅಸ್ಮಿನ್=ಈ ಪರ್ವತೇ=ಪರ್ವತದಲ್ಲಿ ಅಕುತೋಭಯ-ಸಂಚಾರ-ಕಾರಣಂ = ಯಾವ ಕಡೆಯಿಂದಲೂ ಭಯವಿಲ್ಲದಂತೆ ಸಂಚರಿಸಲಿರುವ ಕಾರಣವು ಆಕರ್ಣ್ಯತಾಂ=(ನಿನ್ನಿಂದ) ಆಲಿಸಲ್ಪಡಲಿ. ಪುರಾ=ಹಿಂದೆ ಏಕದಾ=ಒಂದು ದಿವಸ ಅತನು-ಭುಜಬಲಂ=ಅಲ್ಪವಲ್ಲದ ಬಾಹುಪರಾಕ್ರಮವುಳ್ಳ ಅಖಿಲ-ಕುಲಾಚಲ-ಚಲನ- ಚತುರಂ = ಸಮಸ್ತ ಕುಲಪರ್ವತಗಳನ್ನೂ ಅಲ್ಲಾಡಿಸಲು ಶಕ್ತನಾದ ಚತುರರ್ಣವ-ಲಂಘನ-ಜಂಘಾಲಂ = ನಾಲ್ಕು ಸಮುದ್ರಗಳನ್ನೂ ದಾಟುವಷ್ಟು ಜಂಘಾಬಲವುಳ್ಳ ವಾಲಿನಂ=ವಾಲಿಯನ್ನು ಲುಲಾಯಕಾಯಃ=ಎಮ್ಮೆಕೋಣನ ಆಕೃತಿಯ ದುಂದುಭಿಃ ನಾಮ=ದುಂದುಭಿ ಎಂಬ ಹೆಸರಿನ ವೃಂದಾರಕ+ಅರಿಃ=ದೇವತೆಗಳ ಶತ್ರುವಾದ ದಾನವನೊಬ್ಬನು ಪರಿಭೂಯ=ತಿರಸ್ಕಾರದಿಂದ ಎದುರಿಸಿ ಸಮರೇ=ಯುದ್ಧದಲ್ಲಿ ಸಮುತಿಷ್ಠತ=ಸತ್ತುಹೋದನು. ತದನು=ಆಗ ನಿಹತಸ್ಯ=ಮೃತನಾದ ತಸ್ಯ=ಆ ದುಂದುಭಿಯ ಶರೀರಂ=ಶರೀರವನ್ನು ವಾಲೀ=ವಾಲಿಯು ಬಲ+ಅವಲೇಪೇನ=(ತನ್ನ) ಬಲದ ಗರ್ವದಿಂದ ಸಕಲ-ಲೋಕ-ವಿಲಯ-ವಿಲೋಲ-ಲಲಿತ+ಅತುಲಬಲ-ಪವನ-ಚಲಿತ-[1]ಲಘು-[2]ತೂಲ-ಲೀಲಯಾ=ಸಮಸ್ತಲೋಕಗಳ ಪ್ರಲಯದಲ್ಲಿ ವಿಶೇಷ ಚಂಚಲವೂ ಲಲಿತವೂ ಆದ ಅಸಮಾನ ಬಲವುಳ್ಳ ಗಾಳಿಯಿಂದ ಹಾರಿಸಲ್ಪಟ್ಟ [1]ಹಗುರವಾದ [2]ಹತ್ತಿಯಂತೆ ಮತಂಗ+ಆಶ್ರಮ-ಕ್ಷಿತೌ=ಮತಂಗಾಶ್ರಮದ ಪ್ರದೇಶದಲ್ಲಿ ಕ್ಷಿಪ್ರಂ=ಬೇಗ ಅಕ್ಷಿಪತ್=ಎಸೆದುಬಿಟ್ಟನು.

तत्र वालिकरनुन्ननिष्पतद्दुन्दुभि[1]प्रभवरक्तबिन्दुभिः ।
पाटलं तदभवन्मुनेर्वनं तस्य वक्त्रमपि रोष[2]पाटलम् ॥११॥

[1] प्रसृत.... [2] ....दूषितम् ; रूषितम्

With the drops of blood arisen from Dundubhi crushed by Vālin's hand and dropped in that place, that forest of the sage became red; (and) his face also became red with rage. [11]

ತತ್ರ=ಆ ಸಮಯದಲ್ಲಿ ವಾಲಿಕರ-ನುನ್ನ-ನಿಷ್ಪತತ್+ದುಂದುಭಿ-ಪ್ರಭವ-ರಕ್ತಬಿಂದುಭಿಃ=ವಾಲಿಯ ಕೈಯಿಂದ ಎಸೆಯಲ್ಪಟ್ಟುದರಿಂದಲೇ ಹೊರಗೆ ಸುರಿಯುತ್ತಿದ್ದ ದುಂದುಭಿ ಶರೀರದಲ್ಲಿ ಉಂಟಾಗಿದ್ದ ರಕ್ತದ ಬಿಂದುಗಳಿಂದ ಮುನೇಃ=ಮತಂಗಋಷಿಯ ತತ್ ವನಂ=ಆ ಕಾಡು ಪಾಟಲಂ ಅಭವತ್=ಕೆಂಪಾಯಿತು. ತಸ್ಯ=ಆ ಋಷಿಯ ವಕ್ತ್ರಂ ಅಪಿ=ಮುಖವೂ ಕೂಡ ರೋಷಪಾಟಲಂ=ಕೋಪದಿಂದ ಕೆಂಪಾಗಿ ಆಯಿತು. ॥೧೧॥

९. ततो मतङ्गशापबलादवालिवश्यमृश्यमूकं विमृश्यास्मिन् विस्मृतपुरनिवाससुखे मयि सुचिरं निवसति सति—

Therefore, considering that Ṛs'yamūka is beyond the reach of Vālin on account of the power of Mataṅga's curse, while I have been living here since a very long time, the luxuries of city life being forgotten,—

ತತಃ=ಆಮೇಲೆ ಮತಂಗ-ಶಾಪ-ಬಲಾತ್=ಮತಂಗಋಷಿಯ ಶಾಪದ ಬಲದಿಂದ ಋಷ್ಯಮೂಕಂ=ಋಷ್ಯಮೂಕಪರ್ವತವು ಅವಾಲಿ-ವಶ್ಯಂ=ವಾಲಿಗೆ ವಶ್ಯವಲ್ಲವೆಂಬುದನ್ನು (ಅಂದರೆ ವಾಲಿಯು ಪ್ರವೇಶಿಸಲು ಸಾಧ್ಯವಲ್ಲವೆಂಬುದನ್ನು) ವಿಮೃಶ್ಯ=ಆಲೋಚಿಸಿ ಅಸ್ಮಿನ್=ಈ ಋಷ್ಯಮೂಕ ಪರ್ವತದಲ್ಲಿ ವಿಸ್ಮೃತ-ಪುರನಿವಾಸ-ಸುಖೇ=ಮರೆತುಹೋದ ನಗರವಾಸ ಸೌಖ್ಯವುಳ್ಳ ಮಯಿ=ನಾನು ಸುಚಿರಂ=ದೀರ್ಘಕಾಲ ನಿವಸತಿ ಸತಿ=ವಾಸಿಸುತ್ತಿರಲಾಗಿ,

अयमसुखयदेवं देव धीमान्हनूमान्
रिपुरिति भवतोऽपि त्रस्तमस्तौजसं माम् ।
दवहुतवहधूमस्तोम इत्यम्बुवाहा-
चकितमिव मयूरं मारुतो वारिशीतः ॥ १२ ॥

O my lord! this wise Hanumān thus gladdened me of depressed spirits and afraid of you too as an enemy, just as a breeze, cool being laden with water, would gladden the peacock afraid of a cloud thinking it to be a column of smoke of a wild fire."

ದೇವ=ಸ್ವಾಮಿಯೆ, ಧೀಮಾನ್=ಬುದ್ಧಿಶಾಲಿಯಾದ ಹನೂಮಾನ್ =ಹನುಮಂತನು ರಿಪುಃ ಇತಿ=(ವಾಲಿಯೇ ಕಳುಹಿಸಿದ) ಶತ್ರು ಎಂಬುದಾಗಿ ಭವತಃ ಅಪಿ=ನಿಮಗೂ ಕೂಡ ತ್ರಸ್ತಂ=ಹೆದರಿದ್ದ ಅಸ್ತ+ಓಜಸಂ=ನಷ್ಟವಾದ ಉತ್ಸಾಹವುಳ್ಳವನಾಗಿದ್ದ ಮಾಂ=ನನ್ನನ್ನು ಏವಂ=ಈ ಪ್ರಕಾರವಾಗಿ ಅಸುಖಯತ್=ಸಂತೋಷಪಡಿಸಿದನು. ವಾರಿಶೀತಃ=ನೀರಿನ ಸಂಪರ್ಕದಿಂದ ಶೀತವಾದ ಮಾರುತಃ=ಗಾಳಿಯು ದವ-ಹುತವಹ-ಧೂಮ-ಸ್ತೋಮಃ=ದಾವಾಗ್ನಿಯ ಹೊಗೆಯ ರಾಶಿ ಇತಿ=ಎಂದು ಅಂಬುವಾಹಾತ್ =ಮೋಡಕ್ಕೇ ಚಕಿತಂ=ಹೆದರಿದ ಮಯೂರಂ=ನವಿಲನ್ನು ಇವ=ಹೇಗೆ ಸಂತೋಷಪಡಿಸುತ್ತದೇ ಹಾಗೆ. ॥೧೨॥

*— Fight between Vālin and Sugrīva —*

१०. श्रुत्वाथ रामः शोकोदग्रां सुग्रीवगिरं, 'यद्येवं महाभाग, मा भैषीः । मम शिलीमुख एव वलीमुखस्य तस्यासून्कालक्षेपमपास्य पास्यति' इत्युक्त्वा तत्प्रत्ययार्थं पादाङ्गुष्ठप्रेरितदुन्दुभिकलेवरभरस्तत्कर्मणाप्यतृप्तस्य सुग्रीवस्य प्रार्थनया [1]सप्तभुवनस्तम्भसम्भावनया किल सप्तधा [2]धात्रा प्रवर्ध्यमानपरिणाहारोहान् [3]सप्तसालानविधेययातुधानकुलवध-

[1] सप्तभुवनभवनस्तम्भ... [2] धात्र्यां वर्धमान [3] सप्तसालानप्यविधेय....

विघायकेन सायकेन विव्याध । सोऽयं सायको िकटगिरिकटकमपि पाटयामास ।

Then, having heard Sugriva's words that had reached the height of sorrow, Rāma said — ' If so, noble sir, do not fear. The very arrow of mine shall drink, avoiding delay, the life of that monkey; and in order to infuse confidence in him, he kicked up with his toe the heavy body (corpse) of Dundubhi; and, at the request of Sugrīva not satisfied with even that act, he uprooted the seven sāla trees with a single arrow which could cause the slaughter of the whole race of the impudent Rākṣasas,—the sāla trees which were of a height and width that were made to increase by the Creator perhaps with the intention of providing the seven worlds with seven different pillars. That very arrow cleaved even the slopes of the nearby mountain.

ಅಥ=ಅನಂತರ ರಾಮಃ=ರಾಮನು ಶೋಕ+ಉದಗ್ರಾಂ=ಶೋಕ ಬಹುಳವಾದ ಸುಗ್ರೀವ-ಗಿರಂ=ಸುಗ್ರೀವನ ಮಾತನ್ನು ಶ್ರುತ್ವಾ=ಕೇಳಿ— ಮಹಾಭಾಗ=ವಾನರಸಾರ್ವಭೌಮನೇ! ಏವಂ ಯದಿ=ಹೀಗಾದರೆ ಮಾ ಭೈಷೀಃ=ಹೆದರಬೇಡ; ಮಮ=ನನ್ನ ಶಿಲೀಮುಖಃ ಏವ=ಬಾಣವೇ ತಸ್ಯ=ಆ ವಲೀಮುಖಸ್ಯ=ವಾನರನ (ಅಂದರೆ ವಾಲಿಯ) ಅಸೂನ್=ಪ್ರಾಣಗಳನ್ನು ಕಾಲಕ್ಷೇಪಂ=ಕಾಲವಿಳಂಬವನ್ನು ಅಪಾಸ್ಯ=ಪರಿಹರಿಸಿ ಪಾಸ್ಯತಿ=ಕುಡಿಯುವುದು. ಇತಿ=ಎಂದು ಉಕ್ತ್ವಾ=ಹೇಳಿ ತತ್‌ಪ್ರತ್ಯಯ+ಅರ್ಥಂ=ಅವನ ನಂಬಿಕೆಗೋಸ್ಕರ ಪಾದಾಂಗುಷ್ಠ-ಪ್ರೇರಿತ-ದುಂದುಭಿ-ಕಲೇವರ-ಭರಃ=ಕಾಲಿನ ಹೆಬ್ಬೆಟ್ಟಿನಿಂದ ಎಸೆಯಲ್ಪಟ್ಟ ದುಂದುಭಿಯ ಶರೀರದ ಹೊರೆಯುಳ್ಳ, ತತ್-ಕರ್ಮಣಾ ಅಪಿ=ಆ ಕೆಲಸದಿಂದಲೂ ಅತೃಪ್ತಸ್ಯ=ತೃಪ್ತನಾಗದ ಸುಗ್ರೀವಸ್ಯ=ಸುಗ್ರೀವನ ಪ್ರಾರ್ಥನಯಾ=ಪ್ರಾರ್ಥನೆಯಿಂದ ಸಪ್ತಭುವನ-ಸ್ತಂಭ-ಸಂಭಾವನಯಾ=ಏಳು ಲೋಕಗಳಿಗೂ ಆಧಾರಸ್ತಂಭ

ವಾಗುವಿಕೆಯ ಇಚ್ಛೆಯಿಂದ ಕಿಲ=ಎಂಬಂತೆ ಸಪ್ತಧಾ=ಏಳು ಪ್ರಕಾರವಾಗಿ ಧಾತ್ರಾ=ಬ್ರಹ್ಮನಿಂದ ಪ್ರವರ್ಧ್ಯಮಾನ-[1]ಪರಿಣಾಹ [2]ಆರೋಹಾನ್=ಹೆಚ್ಚಿಸಲ್ಪಡುತ್ತಿರುವ [1]ವೈಶಾಲ್ಯ ಮತ್ತು [2]ಎತ್ತರಗಳುಳ್ಳ ಸಪ್ತಸಾಲಾನ್=ಏಳು ಸಾಲವೃಕ್ಷಗಳನ್ನು ಅವಿಧೇಯ-ಯಾತುಧಾನಕುಲ-ವಧ-ವಿಧಾಯಕೇನ=ಅವಿಧೇಯರಾದ ರಾಕ್ಷಸರ ಕುಲದ ವಧೆಯನ್ನೇ ಉಂಟುಮಾಡುವ ಸಾಯಕೇನ=ಬಾಣದಿಂದ ವಿವ್ಯಾಧ=ವೇಧಿಸಿದನು. ಸಃ ಅಯಂ=(ಸಾಲವೃಕ್ಷವನ್ನು ಭೇದಿಸಿದ) ಅಂತಹ ಈ ಸಾಯಕಃ=ಬಾಣವು ನಿಕಟ-ಗಿರಿ-ಕಟಕಂ ಅಪಿ=ಸಮೀಪದ ಪರ್ವತದ ತಪ್ಪಲುಪ್ರದೇಶವನ್ನೂ ಕೂಡ ಪಾಟಯಾ-ಮಾಸ=ಸೀಳಿತು.

निर्भिन्नसालकटकोऽस्मि यथा तथा त्वं
पौलस्त्यसालकटकं युधि पाटयेति ।
ऊचे शिलादलनजातरवेण नूनं
तस्मै वलीमुखवराय शिलीमुखः सः ॥ १३ ॥

The arrow did indeed say to that best of monkeys by means of the sound produced by the cleaving of the rocks,—'Just as I have broken down the Sāla trees and mountain slopes, you break the fortress of Rāvaṇa (descendant of Pulastya) in battle.' [13]

ಯಥಾ=ಯಾವ ಪ್ರಕಾರದಿಂದ ನಿರ್ಭಿನ್ನ-ಸಾಲ-ಕಟಕಃ=ಸಪ್ತಸಾಲವೃಕ್ಷಗಳನ್ನೂ ಗಿರಿಕಟಕವನ್ನೂ ಭೇದಿಸಿದವನಾಗಿ ಅಸ್ಮಿ=ನಾನು ಇದ್ದೇನೋ ತಥಾ=ಅದೇ ಪ್ರಕಾರವಾಗಿ ತ್ವಂ=ನೀನು ಯುಧಿ=ಯುದ್ಧದಲ್ಲಿ ಪೌಲಸ್ತ್ಯಸಾಲಕಟಕಂ=ರಾವಣನ ನಗರದ ಪ್ರಾಕಾರದ ತಪ್ಪಲನ್ನು ಪಾಟಯ=ಸೀಳಿಹಾಕು.—ಇತಿ=ಎಂದು ಸಃ=ಆ ಶಿಲೀಮುಖಃ=ಬಾಣವು ತಸ್ಮೈ=ಆ ವಲೀಮುಖ-ವರಾಯ=ವಾನರಶ್ರೇಷ್ಠನಾದ ಸುಗ್ರೀವನಿಗೆ ಶಿಲಾ-ದಲನ-ಜಾತ-ರವೇಣ=ಕಲ್ಲುಗಳನ್ನು ಸೀಳುವುದರಿಂದುಂಟಾದ ಶಬ್ದದ ಮೂಲಕ ನೂನಂ=ನಿಜವಾಗಿಯೂ ಊಚೇ=ಹೇಳಿತು. ॥ ೧೩ ॥

११. ततस्तत्प्रत्ययादाहूतेन पुरुहूततनयेन सार्धं तस्य [1]तलातल-युद्धे प्रवृद्धे सुजनदुर्जनयोर्भेदं रूपतोऽपि विवेक्तुमक्षमतया [2]सदसि वाचंयमतामुपेत इव वाग्मी तयोरप्येकत्रेषकर्मणोर्भेदमनवगच्छन्नमुक्तशरोऽभूद्दाशरथिः। सुग्रीवस्तु [3]वालिबलासहतया लब्धदैन्यो वदान्य इव राममार्गणापातमार्गे चक्षुर्विक्षिपन्नपगतधृतिः सुदूरमपासरत्। तमेनमृष्य-मूके मूकवत् त्रपया निषण्णं विषण्णहृदयं दयालुरालोक्य त्रैलोक्यैकधन्वी रमस्तद्भेदमवगन्तुकामः कामप्यभिज्ञानमालां सुग्रीवग्रीवायां बाणनिवारण-निपुणां सिद्धौषधिमिव बद्ध्वा भूयोऽपि वालिनमाहवायाह्वयेति तमादिदेश। पुनरप्यवाप्य किष्किन्धां पर्जन्य इव गर्जति तस्मिन्, सुत्रामपुत्रस्ताराभिहितां हितोक्तिमतिक्रम्य दुरतिक्रमतया नियतेः समा-रब्धसमरो दाशरथेर्निशिततरशरशकलितनिजविशालवक्षःस्थलः क्षितितले [4]निपपात। अथ विदितवृत्तान्ता सन्तताश्रुनिष्यन्दकलुषिततरतारा तारा नगरान्निर्गत्य वारिवारितं वारणयूथपतिमिव निर्भयनिरीक्ष्यमाणं सुग्रीव-मुद्गतग्रीवमुत्थातुमक्षमतया क्ष्मातलार्पितकूर्परयुगलं गलदसृक्प्रसरशार-शरीरं शरासनशिखरन्यस्तहस्तेन सन्निकर्षस्थितेन काकुत्स्थेन कृतसंल्लापम्, अपेताडम्बरमिवाम्बुनिधिम्, अस्तोन्मुखमिव मयूखमालिनं, वालिन-मालिङ्ग्य स्वाङ्कोत्तंसिततदुत्तमाङ्गा रघुनाथमित्थमकथयत्।

[1] तलातलियुद्धे [2] मनसि विचारयन्सदसि [3] वालिबलासहनतया
[4] सहसा पपात

Then, while a wrestling fight grew intense with Vālin (son of Indra) who was called to a battle (by Sugrīva) out of confidence (inspired) by that (feat of Rāma), Rāma remained with his arrow

not discharged, like an orator taken to a vow of silence in an assembly, not knowing the difference between them of the same dress and deed, owing to inability in distinguishing between the good one and the bad one even by form. Sugrīva, however, on account of his inability to withstand Vālin's might, casting his look in the direction by which Rāma's arrows (beggars) would come, fled a long way off in despair like a liberal donor who has become poor. The compassionate Rāma, the most renown archer of all the three worlds, seeing him sitting in shame on the Ṛṣyamūka like a dumb man dejected at heart, tied round his neck, in order to distinguish him ( from Vālin ), a certain garland of recognition which, like a herb of tested cure, was able to prevent ( the fall of ) arrows; and ordered him — 'Call Vālin for battle once again.' While he was once again roaring like a cloud on reaching Kiṣkindhā, Indra's son, disregarding the wholesome counsel of Tārā on account of the intransgressibility of fate, began to fight with him and fell down on the earth with his broad chest rent to pieces by the extremely sharp arrows of Das'aratha's son. Then, on coming to know the news, Tārā with the pupils of her eyes sullied by the continuous flow of tears, having come out of the city, clung to Vālin who was like a tusker held up in a trap; who fearlessly looked at Sugrīva; whose neck was erect; who, on account of his inability to rise, had rested his elbows on the earth; whose body was tainted by the spread of shedding blood; who was conversing with Kakutstha ( Rāma ) who stood closeby resting his hand on the top of his bow; who was like the

ocean bereft of its loud roar; and who appeared like the Sun inclined to set; — and adorning her lap with his head, she said to the lord of Raghus, thus.—

ತತಃ=ಆಮೇಲೆ ತತ್‌ಪ್ರತ್ಯಯಾತ್=ಆ (ಸಾಲಭೇದನರೂಪವಾದ) ನಂಬಿಕೆಯಿಂದ ಆಹೂತೇನ=(ಯುದ್ಧಕ್ಕಾಗಿ) ಕರೆಯಲ್ಪಟ್ಟ ಪುರುಹೂತ-ತನಯೇನ ಸಾರ್ಧಂ=ಇಂದ್ರಪುತ್ರನಾದ ವಾಲಿಯೊಡನೆ ತಸ್ಯ=ಆ ಸುಗ್ರೀವನಿಗೆ ತಲಾತಲಯುದ್ಧೇ=ಮುಷ್ಟಿಯುದ್ಧವು ಪ್ರವೃದ್ಧೇ=ಬೆಳೆಯಲಾಗಿ ಸುಜನ-ದುರ್ಜನಯೋಃ=ಒಳ್ಳೆಯವನಿಗೂ ಕೆಟ್ಟವನಿಗೂ ಇರುವ ಭೇದಂ=ಭೇದವನ್ನು ರೂಪತಃ ಅಪಿ=ಆಕಾರದಿಂದಲೂ ಕೂಡ ವಿವೇಕ್ತುಂ=ಗುರುತಿಸಲು ಅಕ್ಷಮತಯಾ=ಅಸಾಮರ್ಥ್ಯದಿಂದ ಸದಸಿ=ಸಭೆಯಲ್ಲಿ ವಾಚಂಯಮತಾಂ=ಮೌನವನ್ನು ಉಪೇತಃ=ಕೈಗೊಂಡ ವಾಗ್ಮೀ ಇವ=ವಾಚಾಳಿಯಂತೆ ದಾಶರಥಿಃ=ಶ್ರೀರಾಮನು ಏಕವೇಷ-ಕರ್ಮಣೋಃ=ಒಂದೇ ವೇಷ ಮತ್ತು ಕೆಲಸಗಳುಳ್ಳ ತಯೋಃ ಅಪಿ=ಆ ವಾಲಿಸುಗ್ರೀವರುಗಳಲ್ಲೂ ಭೇದಂ=ವ್ಯತ್ಯಾಸವನ್ನು ಅನವಗಚ್ಛನ್=ತಿಳಿಯದವನಾಗಿ ಅಮುಕ್ತಶರಃ=ಬಾಣವನ್ನು ಬಿಡದವನಾಗಿಯೇ ಅಭೂತ್=ಇದ್ದುಬಿಟ್ಟನು. ಸುಗ್ರೀವಃ ತು=ಸುಗ್ರೀವನಾದರೋ ವಾಲಿಬಲ+ಅಸಹತಯಾ=ವಾಲಿಯ ಬಲವನ್ನು ತಡೆಯಲಾರದೆ ಲಬ್ಧದೈನ್ಯಃ=ದೀನಭಾವವನ್ನು ಹೊಂದಿ ವದಾನ್ಯಃ ಇವ=ದಾನಶೀಲನಂತೆ ರಾಮ-ಮಾರ್ಗಣ+ಆಪಾತ-ಮಾರ್ಗೇ=ರಾಮನ ಬಾಣಗಳ (ಯಾಚಕರ) ಬರುವಿಕೆಯ ದಾರಿಯಲ್ಲಿ ಚಕ್ಷುಃ=ದೃಷ್ಟಿಯನ್ನು ವಿಕ್ಷಿಪನ್=ಬೀರುತ್ತಾ ಅಪಗತಧೃತಿಃ=ಧೈರ್ಯ ಹೋದವನಾಗಿ ಸುದೂರಂ=ತುಂಬದೂರ ಅಪ+ಅಸರತ್=ಹಿಂದಕ್ಕೆ ಸರಿದನು. ತ್ರಪಯಾ=(ಪರಾಜಿತನಾದೆನೆಂಬ) ನಾಚಿಕೆಯಿಂದ ಋಷ್ಯ-ಮೂಕೇ=ಋಷ್ಯಮೂಕಪರ್ವತದಲ್ಲಿ ಮೂಕವತ್=ಮೂಗನಂತೆ ನಿಷಣ್ಣಂ=ಕುಳಿತಿದ್ದ ವಿಷಣ್ಣಹೃದಯಂ=ವಿಷಾದದಿಂದ ಕೂಡಿದ ಹೃದಯವುಳ್ಳ ತಂ=ಅಂತಹ ಏನಂ=ಈ ಸುಗ್ರೀವನನ್ನು ಆಲೋಕ್ಯ=ಕಂಡು ದಯಾಲುಃ=ದಯಾಳುವಾದ ತ್ರೈಲೋಕ್ಯ+ಏಕಧನ್ವೀ=ಮೂರು ಲೋಕಗಳಲ್ಲೂ ಪ್ರಮುಖ ಧನುರ್ವಿದ್ಯಾನಿಪುಣನಾದ ರಾಮಃ=ರಾಮನು ತತ್+ಭೇದಂ=

ಅವರಿಬ್ಬರಲ್ಲಿನ ವ್ಯತ್ಯಾಸವನ್ನು ಅವಗಂತು ಕಾಮಃ= ತಿಳಿಯಲು ಇಚ್ಛಿಸುವವನಾಗಿ ಕಾಂ ಅಪಿ=ಯಾವುದೋ ಒಂದು ಅಭಿಜ್ಞಾನಮಾಲಾಂ= ಗುರುತಿಗಾಗಿ ಏರ್ಪಡಿಸಿದ ಮಾಲೆಯನ್ನು ಸುಗ್ರೀವ-ಗ್ರೀವಾಯಾಂ=ಸುಗ್ರೀವನ ಕೊರಳಿನಲ್ಲಿ ಬಾಣ-ನಿವಾರಣ-ನಿಪುಣಾಂ=ಬಾಣಗಳನ್ನು ತಡೆಯುವುದರಲ್ಲಿ ಸಮರ್ಥವಾದ ಸಿದ್ಧೌಷಧಿಂ ಇವ=ಸಿದ್ಧೌಷಧಿಯನ್ನೋ ಎಂಬಂತೆ ಬಧ್ವಾ=ಕಟ್ಟಿ ಭೂಯಃ ಅಪಿ=ತಿರುಗಿಯೂ ವಾಲಿನಂ=ವಾಲಿಯನ್ನು ಆಹವಾಯ=ಯುದ್ಧಕ್ಕಾಗಿ ಆಹ್ವಯ=ಕರೆ ಇತಿ=ಎಂದು ತಂ=ಅವನಿಗೆ ಆದಿದೇಶ=ಅಪ್ಪಣೆಮಾಡಿದನು. ತಸ್ಮಿನ್=ಆ ಸುಗ್ರೀವನು ಪುನಃ ಅಪಿ= ತಿರುಗಿಯೂ ಕಿಷ್ಕಿಂಧಾಂ = ಕಿಷ್ಕಿಂಧಾಪಟ್ಟಣವನ್ನು ಅವಾಪ್ಯ = ಸೇರಿ ಪರ್ಜನ್ಯಃ ಇವ= ಮೇಘದಂತೆ ಗರ್ಜತಿ (ಸತಿ)= ಗರ್ಜಿಸುತ್ತಿರಲಾಗಿ ಸುತ್ರಾಮ-ಪುತ್ರಃ=ಇಂದ್ರಪುತ್ರನಾದ ವಾಲಿಯು ತಾರಾ+ಅಭಿಹಿತಾಂ= ತನ್ನ ಹೆಂಡತಿಯಾದ ತಾರೆಯಿಂದ ಆಡಲ್ಪಟ್ಟ ಹಿತೋಕ್ತಿಂ=ಹಿತವಚನವನ್ನು ಅತಿಕ್ರಮ್ಯ = ಮೀರಿ, ನಿಯತೇಃ = ವಿಧಿಯ ದುರತಿಕ್ರಮತಯಾ = ದುರ್ಲಂಘ್ಯತೆಯ (ಮೀರಲಾರದಿರುವಿಕೆಯ) ಕಾರಣದಿಂದ ಸಮಾರಬ್ಧ-ಸಮರಃ = ಯುದ್ಧವನ್ನಾರಂಭಿಸಿದವನಾಗಿ ದಾಶರಥೇಃ = ಶ್ರೀರಾಮನ ನಿಶಿತ-ತರ-ಶರ-ಶಕಲಿತ-ನಿಜ-ವಿಶಾಲ-ವಕ್ಷಃಸ್ಥಲಃ = ತುಂಬ ತೀಕ್ಷ್ಣವಾದ ಬಾಣದಿಂದ ಚೂರುಮಾಡಲ್ಪಟ್ಟ ತನ್ನ ವಿಶಾಲವಾದ ವಕ್ಷಸ್ಥಲವುಳ್ಳವನಾಗಿ ಕ್ಷಿತಿತಲೇ = ನೆಲದಮೇಲೆ ನಿಪಪಾತ = ಬಿದ್ದುಬಿಟ್ಟನು. ಅಥ=ಬಳಿಕ ವಿದಿತವೃತ್ತಾಂತಾ = ತಿಳಿಸಲ್ಪಟ್ಟ ವೃತಾಂತವುಳ್ಳವಳಾಗಿ ಸಂತತ+ಅಶ್ರು-ನಿಷ್ಯಂದ-ಕಲುಷಿತ-ತರ-ತಾರಾ = ಎಡಬಿಡದೆ ಕಣ್ಣೀರು ಹರಿಯುವುದರಿಂದ ತುಂಬ ಕಲುಷಗೊಂಡ ಕಣ್ಣುಗುಡ್ಡೆಗಳುಳ್ಳ ತಾರಾ= ವಾಲಿಯ ಹೆಂಡತಿ ತಾರೆಯು ನಗರಾತ್ = ಪಟ್ಟಣದಿಂದ ನಿರ್ಗತ್ಯ=ಹೊರಕ್ಕೆ ಬಂದು [1] ವಾರಿ-ವಾರಿತಂ = [1]ಬಂಧನದಲ್ಲಿ ಹಿಡಿದಿಡಲ್ಪಟ್ಟ ವಾರಣ-ಯೂಥಪತಿಂ ಇವ= ಆನೆಯ ಸಲಗನಂತಿದ್ದ, ನಿರ್ಭಯ-ನಿರೀಕ್ಷ್ಯಮಾಣ-ಸುಗ್ರೀವಂ=ನಿರ್ಭಯವಾಗಿ ನಿರೀಕ್ಷಿಸಲ್ಪಡುತ್ತಿದ್ದ ಸುಗ್ರೀವನುಳ್ಳ, ಉದ್ಗತ-ಗ್ರೀವಂ=ಕುತ್ತಿಗೆಯನ್ನು ಮೇಲಕ್ಕೆತ್ತಿದ್ದ, ಉತ್ಥಾತುಂ = ಮೇಲಕ್ಕೇಳಲು ಅಕ್ಷಮತಯಾ = ಅಸಾಮರ್ಥ್ಯದಿಂದ ಕ್ಷ್ಮಾತಲ+ಅರ್ಪಿತ-ಕೂರ್ಪರ-ಯುಗಳಂ = ಭೂಮಿಗೆ

ತನ್ನೆರಡು ಮೊಣಕ್ಕೈಗಳನ್ನೂ ಊರಿಕೊಟ್ಟುಕೊಂಡಿದ್ದ, ಗಲದ್-ಅಸೃಕ್-ಪ್ರಸರ-ಶಾರ-ಶರೀರಂ=ಹೊರಬರುತ್ತಿರುವ ರಕ್ತಪ್ರವಾಹದಿಂದ ರಂಜಿತವಾದ ಶರೀರವುಳ್ಳ, ಶರಾಸನ-ಶಿಖರ-ನ್ಯಸ್ತ-ಹಸ್ತೇನ= ಬಿಲ್ಲಿನ ಅಗ್ರಭಾಗದಲ್ಲಿ ಕೈ ಊರಿಕೊಂಡವನಾಗಿ ಸಂನಿಕರ್ಷ-ಸ್ಥಿತೇನ= ಹತ್ತಿರದಲ್ಲೇ ನಿಂತಿದ್ದ ಕಾಕುತ್ಸ್ಥೇನ= ಶ್ರೀರಾಮನೊಡನೆ ಕೃತಸಂಲಾಪಂ= ಮಾತನಾಡುತ್ತಿದ್ದ, ಅಪೇತ+ಆಡಂಬರಂ=ಆಡಂಬರ ನೀಗಿದ ಅಂಬುನಿಧಿಂ ಇವ= ಸಮುದ್ರದಂತಿದ್ದ, ಅಸ್ತ+ಉನ್ಮುಖಂ=ಮುಳುಗುವುದರಲ್ಲಿದ್ದ ಮಯೂಖಮಾಲಿನಂ ಇವ=ಸೂರ್ಯನಂತಿದ್ದ ವಾಲಿನಂ=ವಾಲಿಯನ್ನು ಆಲಿಂಗ್ಯ= ತಬ್ಬಿಕೊಂಡು ಸ್ವ+ಅಂಕ+[1]ಉತ್ತಂಸಿತ-ತತ್+[2]ಉತ್ತಮಾಂಗಾ=ತನ್ನ ತೊಡೆಯಮೇಲೆ ಅವನ [2]ತಲೆಯನ್ನು [1]ಇಟ್ಟುಕೊಂಡವಳಾಗಿ ರಘುನಾಥಂ=ಶ್ರೀರಾಮನನ್ನು ಕುರಿತು ಇತ್ಥಂ=ಈ ಪ್ರಕಾರವಾಗಿ ಅಕಥಯತ್=ಹೇಳಿದಳು.—

*—Tārā addresses Srī Rāma—*

कारुण्यं निरवधि यत्तव प्रसिद्धं
शीतांशोः सहजमिवार्तिहारि शैत्यम् ।
तत्सर्वं मनुकुलनाथ रम्यकीर्ते
मत्पापात्कथय कथं त्वया निरस्तम् ॥ १४ ॥

"That boundless kindness of yours, so well-known as the natural coolness of the moon capable of driving out torment, O lord of Manu's race, O one of pleasing glory, tell me, how was all that set aside by you to my bad luck ? [14]

ಮನುಕುಲನಾಥ = ಮನುವಂಶನಾಯಕನೇ! ರಮ್ಯಕೀರ್ತೇ = ರಮಣೀಯವಾದ ಕೀರ್ತಿಯುಳ್ಳವನೇ! ಶೀತಾಂಶೋಃ=ಚಂದ್ರನ ಸಹಜಂ =ಸ್ವಾಭಾವಿಕವಾದ ಆರ್ತಿಹಾರಿ= ಇತರರ ಉಪತಾಪಗಳನ್ನು ಪರಿಹರಿಸುವ ಶೈತ್ಯಂ ಇವ=ಶೈತ್ಯದ ಹಾಗೆ ತವ=ನಿನ್ನ ನಿರವಧಿ=ಎಲ್ಲೆಯಿಲ್ಲದ ಯತ್= ಯಾವ ಕಾರುಣ್ಯಂ= ಕರುಣೆಯು ಪ್ರಸಿದ್ಧಂ=ಲೋಕವಿಖ್ಯಾತವಾಗಿತ್ತೋ

ತತ್ ಸರ್ವಂ=ಅದೆಲ್ಲವೂ ಮತ್‌ಪಾಪಾತ್=ನನ್ನ ದುಷ್ಕೃತ್ಯದ ಕಾರಣದಿಂದ ತ್ವಯಾ=ನಿನ್ನಿಂದ ಕಥಂ=ಹೇಗೆ ತಾನೇ ನಿರಸ್ತಂ=ತ್ಯಜಿಸಲ್ಪಟ್ಟಿತು. ಕಥಯ=ಹೇಳು. ॥ ೧೪ ॥

एवंविधे प्रियतमेऽप्यनपेतजीवां
मां राक्षसीति रघुपुङ्गव साधु बुद्ध्वा ।
बाणं विमुञ्च मयि सम्प्रति ताटकारे
श्रेयो भवेद्दयितसङ्गमकारिणस्ते ॥ १५ ॥

O best of Raghus! Considering me as a demoness in truth, as I am with life not given up even when my dear lord is in such a plight, discharge at me your arrow now. O enemy of Tāṭakā, prosperity will attend on you if you thus unite me with my dear lord. [15]

ತಾಟಕಾರೇ=ಎಲೌ ತಾಟಕಾಂತಕನೆ! ರಘುಪುಂಗವ=ರಘುಶ್ರೇಷ್ಠನಾದ ಶ್ರೀರಾಮನೆ! ಪ್ರಿಯತಮೇ=ನನ್ನ ಪ್ರಿಯತಮನಾದ ವಾಲಿಯು ಏವಂ ವಿಧೇ (ಸತಿ) ಅಪಿ=ಈ ಪ್ರಕಾರವಾಗಿ (ಮೃತನಾಗಿ) ಇದ್ದರೂ ಕೂಡ ಅನಪೇತ-ಜೀವಾಂ=ಪ್ರಾಣ ಹೋಗದಿರುವ ಮಾಂ=ನನ್ನನ್ನು ರಾಕ್ಷಸೀ ಇತಿ =ರಾಕ್ಷಸಿಯೆಂಬುದಾಗಿ ಸಾಧು=ಸರಿಯಾಗಿ ಬುದ್ಧ್ವಾ=ತಿಳಿದು ಸಂಪ್ರತಿ= ಈಗ ಮಯಿ=ನನ್ನ ಮೇಲೆ ಬಾಣಂ=ಬಾಣವನ್ನು ವಿಮುಂಚ=ಪ್ರಯೋಗ ಮಾಡು. ದಯಿತ-ಸಂಗಮ-ಕಾರಿಣಃ=(ಈ ರೀತಿ) ಪ್ರಿಯನೊಡನೆ (ನನ್ನ) ಸಮಾಗಮವಾಗುವಂತೆ ಮಾಡುವ ತೇ=ನಿನಗೆ ಶ್ರೇಯಃ=ಶ್ರೇಯಸ್ಸು ಭವೇತ್=ಉಂಟಾದೀತು. ॥ ೧೫ ॥

साधारणी [1]क्षितिभुजां मृगयेति पूर्वम्
उक्तं[2] त्वयैव जनसंसदि सत्यवादिन् ।

[1] क्षितिभृतां [2] उक्ता

शाखामृगीं तदिह मारय मां शरेण
को नाम राम मृगयुर्दयते मृगीणाम् ॥ १६ ॥

It has been already stated by yourself in an assembly that hunting is common with kings. Therefore, O truth-teller, kill me, a female monkey, with your arrow. O Rāma! which hunter would be merciful to female animals?

ಸತ್ಯವಾದಿನ್ = ನಿಜನುಡಿಯುವವನೇ! ಕ್ಷಿತಿಭುಜಾಂ = ರಾಜರಿಗೆ ಮೃಗಯಾ=ಬೇಟೆಯಾಡುವುದು ಸಾಧಾರಣೀ=ಸರ್ವಸಮ್ಮತವಾದುದು ಇತಿ =ಎಂಬುದಾಗಿ ತ್ವಯಾ ಏವ=ನಿನ್ನಿಂದಲೇ ಜನಸಂಸದಿ=ಜನಸಮೂಹದಲ್ಲಿ ಉಕ್ತಾ=ಹೇಳಲ್ಪಟ್ಟಿತು. ತತ್=ಆದ್ದರಿಂದ ಇಹ=ಈಗ ಶಾಖಾಮೃಗೀಂ =ವಾನರಿಯಾದ ಮಾಂ=ನನ್ನನ್ನು ಮಾರಯ=ಕೊಂದುಹಾಕು. ರಾಮ= ಎಲೈ ಶ್ರೀರಾಮನೇ! ಕಃ=ಯಾವ ಮೃಗಯುಃ ನಾಮ=ಬೇಟೆಗಾರನು ತಾನೇ ಮೃಗೀಣಾಂ=ಹೆಣ್ಣುಪ್ರಾಣಿಗಳ ಬಗ್ಗೆ ದಯತೇ=ದಯೆತೋರುತ್ತಾನೆ?

सन्त्रस्य पूर्वममुतस्तव बन्धुरेष
मेजे यथाद्रिमकुतोभयमृष्यमूकम् ।
भर्ता ममायमपि रामशरैरभेद्यं
प्राप्तो मदीयहृदय[1]च्छलमद्रिदुर्गम् ॥ १७ ॥

1 ....स्थलमद्रिदुर्गम्

Just as this friend of yours (Sugrīva) afraid of this (Vālin) resorted formerly to the Ṛṣyamūka, free from fear of anyone, so also has this lord of mine retired to the mountain-fortress of my heart which is impenetrable even to Rāma's arrows. [17]

ರಾಮ=ಎಲೌ ರಾಮನೇ! ಏಷಃ=ಈ ತವ= ನಿನ್ನ ಬಂಧುಃ= ಸ್ನೇಹಿತನಾದ ಸುಗ್ರೀವನು ಪೂರ್ವಂ=ಮೊದಲು ಅಮುತಃ=ಈ ವಾಲಿಯ

ದೆಸೆಯಿಂದ ಸಂತ್ರಸ್ಯ=ಹೆದರಿಕೊಂಡು ಯಥಾ=ಯಾವ ಪ್ರಕಾರವಾಗಿ ಅಕುತೋಭಯಂ=ಯಾವ ಕಡೆಯಿಂದಲೂ ಭಯವಿಲ್ಲದ ಋಷ್ಯಮೂಕಂ =ಋಷ್ಯಮೂಕವೆಂಬ ಅದ್ರಿಂ=ಬೆಟ್ಟವನ್ನು ಭೇಜೇ=ಸೇರಿಕೊಂಡನೋ ತಥಾ=ಅದೇ ಪ್ರಕಾರವಾಗಿ ಅಯಂ=ಈ ಮಮ=ನನ್ನ ಭರ್ತಾ ಅಪಿ= ಗಂಡನೂ ಕೂಡ ಅಮುತಃ=ಈ ನಿನ್ನ (ಅಥವಾ ಸುಗ್ರೀವನ) ದೆಸೆಯಿಂದ ಸಂತ್ರಸ್ಯ=ಹೆದರಿಕೊಂಡು ಶರೈಃ=(ನಿನ್ನ) ಬಾಣಗಳಿಂದ ಅಭೇದ್ಯಂ= ಭೇದಿಸಲಶಕ್ಯವಾದ ಅಕುತೋಭಯಂ=ಯಾವ ಕಡೆಯಿಂದಲೂ ಭಯವಿಲ್ಲದ ಮದೀಯ-ಹೃದಯ-ಚ್ಛಲಂ=ನನ್ನ ಹೃದಯವೆಂಬ ಕಪಟರೂಪದ ಅದ್ರಿ-ದುರ್ಗಂ=ಗಿರಿದುರ್ಗವನ್ನು ಪ್ರಾಪ್ತಃ=ಸೇರಿಕೊಂಡಿದ್ದಾನೆ. ॥ ೧೭ ॥

नाहं सुकेतुतनया न च सप्तसाली
वाली न च त्रिभुवनप्रथितप्रभावः ।
तारास्मि वज्रहृदया विशिखैरभेद्या
धन्वी कथं भवसि राघव मामविद्ध्वा ॥ १८ ॥

I am neither Suketu's daughter, nor the grove of seven sāla trees, nor even Vālin whose power is well known throughout the three worlds. I am Tārā of an adamentine heart which is impregnable to arrows. Without hitting me, O descendent of Raghu, how would you be an archer ? [18]

ಅಹಂ=ನಾನು ಸುಕೇತುತನಯಾ ನ=ಸುಕೇತುವಿನ ಮಗಳಾದ ತಾಟಕೆಯಲ್ಲ. ಸಪ್ತಸಾಲೀ ಚ=ಏಳು ಸಾಲವೃಕ್ಷಗಳ ಶ್ರೇಣಿಯೂ ನ=ಅಲ್ಲ. ತ್ರಿಭುವನ-ಪ್ರಥಿತ-ಪ್ರಭಾವಃ=ಮೂರು ಲೋಕಗಳಲ್ಲೂ ಪ್ರಸಿದ್ಧಿಹೊಂದಿದ್ದ ವಾಲೀ ಚ=ವಾಲಿಯೂ ಕೂಡ ನ=ಅಲ್ಲ. ವಿಶಿಖೈಃ=ಬಾಣಗಳಿಂದ ಅಭೇದ್ಯಾ=ಭೇದಿಸಲಶಕ್ಯಳಾದ ವಜ್ರಹೃದಯಾ=ವಜ್ರದಂತೆ ಕಠಿಣವಾದ ಹೃದಯವುಳ್ಳ ತಾರಾ=ತಾರೆಯಾಗಿ ಅಸ್ಮಿ=ಇದ್ದೇನೆ. ರಾಘವ=ಎಲೈ ಶ್ರೀರಾಮನೇ! ಮಾಂ=ನನ್ನನ್ನು ಅವಿದ್ಧ್ವಾ=ಸಂಹರಿಸದೆ ಕಥಂ=ಹೇಗೆ ತಾನೇ ಧನ್ವೀ=ಧಾನುಷ್ಕನಾಗಿ ಭವಸಿ=ನೀನು ಆಗುವಿ? ॥ ೧೮ ॥

क्षितिपतितनयानां हन्त गर्भेश्वराणां
किमु निरवधि मौग्ध्यं शौर्यवज्जन्मसिद्धम् ।
मम हृदि निरपाये वर्तमाने कपीन्द्रे
रघुवर यदमुष्मै तिष्ठसे चापपाणिः ॥ १९ ॥

Is limitless stupidity, like valour, inborn in princes who are rich by birth? For, you stand with the bow in hand to strike at this lord of the monkeys, when he is quite safe in my heart. [19]

ಗರ್ಭೇಶ್ವರಾಣಾಂ=ಆಗರ್ಭಶ್ರೀಮಂತರಾದ ಕ್ಷಿತಿಪತಿ-ತನಯಾನಾಂ =ರಾಜಕುಮಾರರ ನಿರವಧಿ=ಎಲ್ಲೆಯಿಲ್ಲದ ಮೌಗ್ಧ್ಯಂ=ವಿಚಾರಮೂಢತ್ವವು ಶೌರ್ಯವತ್=ಶೌರ್ಯದಂತೆ ಜನ್ಮಸಿದ್ಧಂ ಕಿಮು=ಜನ್ಮಸಿದ್ಧವಾದುದೇನು? ಹಂತ=ಅಯ್ಯೋ ಯತ್=ಯಾವಕಾರಣದಿಂದ ಮಮ=ನನ್ನ ನಿರಪಾಯೇ =ಅಪಾಯವಿಲ್ಲದ ಹೃದಿ=ಹೃದಯದೊಳಗೆ ಕಪೀಂದ್ರೇ=ಕಪಿರಾಜ ವಾಲಿಯು ನಿರಪಾಯೇ=ಅಪಾಯವಿಲ್ಲದವನಾಗಿ ವರ್ತಮಾನೇ=ಇರಲಾಗಿ ರಘುವರ =ರಘುಶ್ರೇಷ್ಠನಾದ ಶ್ರೀರಾಮನೇ! ಅಮುಷ್ಮೈ=ಈ ವಾಲಿಗಾಗಿ ಚಾಪ-ಪಾಣಿಃ=ಧನುಷ್ಪಾಣಿಯಾಗಿ ತಿಷ್ಠಸೇ= ನೀನು ನಿಂತಿದ್ದೀಯೋ! (ನೀನು ಹೀಗೆ ನಿಂತಿರುವುದು ನಿರರ್ಥಕ.) ॥೧೯॥

— *End of Vāli* —

१२. एवं विलपन्त्या हारायिताश्रुधारायास्तारायाः परिदेवनरवैः बाष्पाम्बुकणाभ्युक्षणैः [1]अक्षीणैः निश्वासानिलैश्च कृताश्वास इव लब्धसंज्ञो वाली निजनन्दनं रघुनन्दने समर्प्याङ्गदमङ्गसङ्गिनीं काञ्चन काञ्चनस्रजं शोकावनतग्रीवाय दत्त्वा निजभुजबलप्रशान्तासुरोऽयं प्रशान्तासुरभूत् । तत्र, हा सकलभुवनबहुमतबाहुबल[2] ! गोलभगन्धर्वसिन्धुरपञ्चताकरण-पञ्चानन ! दशमुखभुजभुजङ्गभोगनिरोधाहितुण्डिकायितवालवलय !

वालिन् ! कथं गतोऽसीति बाष्पाविलमुखा वलीमुखास्तस्य रामाज्ञया यथाभिप्रेतं प्रेतकृत्यं सर्वं निर्वर्तयामासुः ।

[1] अक्षीणश्वासानिलैः [2] ....बलानलशलभायिताहितबललिलितगन्धर्व

As Tārā was bemoaning in this manner with tears streaming down like a garland, Vālin gained consciousness as if consoled by her cries of lament, by the spraying of the drops of her tears and by the continuous breeze of her heavy sighs; and he, who had extinguished Asuras by the might of his own arms, having handed over his son Aṅgada to Rāma, and having given a certain gold necklace that was on his own body to Sugrīva who was with his neck bent down with grief, expired. Thereupon the monkeys, with faces sullied with tears, wailed—"Ha ! you whose might of arms was held in esteem by all the worlds ! You, who was the lion that slew the elephant in the form of the gandharva (named) Golabha ! You, whose tail-coil played the role of a snake-charmer in checking the serpent bodies in the form of the arms of the ten-headed Rāvaṇa ! O Vālin ! how is it you are gone ! " And they, at the bidding of Rāma, performed all the funeral rites as required on the occasion.

ಏವಂ=ಈ ರೀತಿ ವಿಲಪಂತ್ಯಾಃ=ಅಳುತ್ತಿದ್ದ ಹಾರಾಯಿತ+ಅಶ್ರು-ಧಾರಾಯಾಃ = ಹಾರದಂತೆ ಆಚರಿಸುತ್ತಿದ್ದ ಕಣ್ಣೀರು ಧಾರೆಯುಳ್ಳ ತಾರಾಯಾಃ=ತಾರೆಯ ಪರಿದೇವನ-ರವೈಃ=ಅಳುವಿನ ಗೋಳಾಟಗಳಿಂದಲೂ ಬಾಷ್ಪಾಂಬುಕಣ+ಅಭ್ಯುಕ್ಷಣೈಃ = ಕಣ್ಣೀರು ಹನಿಗಳ ಸೇಚನಗಳಿಂದಲೂ ಚ=ಮತ್ತು ಅಕ್ಷೀಣೈಃ=ಸಂತತವಾದ ನಿಶ್ವಾಸ+ಅನಿಲೈಃ=ನಿಶ್ವಾಸಮಾರುತಗಳಿಂದಲೂ ಕೃತ + ಆಶ್ವಾಸಃ ಇವ = ಸಮಾಧಾನಗೊಳಿಸಲ್ಪಟ್ಟವನೋ ಎಂಬಂತೆ ಲಬ್ಧಸಂಜ್ಞಃ=ತಿಳಿವುಬಂದ ವಾಲೀ=ವಾಲಿಯು ನಿಜನಂದನಂ=

ತನ್ನ ಮಗನಾದ ಅಂಗದಂ=ಅಂಗದನನ್ನು ರಘುನಂದನೇ=ರಘುನಂದನನಾದ ಶ್ರೀರಾಮನಿಗೆ ಸಮರ್ಪ್ಯ=ಒಪ್ಪಿಸಿ, ಅಂಗಸಂಗಿನೀಂ=(ಸದಾ) ತನ್ನ ಶರೀರಸಂಗಿಯಾಗಿಯೇ ಇರುತ್ತಿದ್ದ ಕಾಂಚನ=ಒಂದು (ಇಂದ್ರದತ್ತವಾಗಿ ಅನರ್ಘ್ಯವಾಗಿದ್ದ) ಕಾಂಚನಸ್ರಜಂ=ಚಿನ್ನದ ಸರವನ್ನು ಶೋಕ+ಅವನತ-ಗ್ರೀವಾಯ=ದುಃಖದಿಂದ ಕುತ್ತಿಗೆ ಬಗ್ಗಿಸಿಕೊಂಡಿದ್ದ ಸುಗ್ರೀವಾಯ=ಸುಗ್ರೀವನಿಗೆ ದತ್ವಾ=ಕೊಟ್ಟು, ನಿಜ-ಭುಜಬಲ-ಪ್ರಶಾಂತ+ಅಸುರಃ=ತನ್ನ ಭುಜಬಲದಿಂದ ಹತರಾಗಿದ್ದ ಅಸುರರುಳ್ಳ ಅಯಂ=ಈ ವಾಲಿಯು ಪ್ರಶಾಂತ+ಅಸುಃ=ಪ್ರಾಣಹೋದವನಾಗಿ ಅಭೂತ್=ಆದನು.

ತತ್ರ=ಆ ಸಮಯದಲ್ಲಿ ಹಾ=ಅಯ್ಯೋ! ಸಕಲ-ಭುವನ-ಬಹುಮತ-ಬಾಹುಬಲ=ಸಮಸ್ತ ಲೋಕಗಳಲ್ಲೂ ಶ್ಲಾಘನೀಯವಾದ ಬಾಹುಬಲವುಳ್ಳವನೇ! ಗೋಲಭ-ಗಂಧರ್ವ-[1]ಸಿಂಧುರ-ಪಂಚತಾಕರಣ-[2]ಪಂಚಾನನ=[1]ಆನೆಯ ರೂಪದ ಗೋಲಭ (ಎಂಬ) ಗಂಧರ್ವನ ಮರಣವನ್ನುಂಟುಮಾಡಿದ[2]ಸಿಂಹವೇ! ದಶಮುಖ-ಭುಜ-[3]ಭುಜಂಗ[4]ಭೋಗ-ನಿರೋಧ+[5]ಅಹಿತುಂಡಿಕಾಯಿತ-ವಾಲವಲಯ=ರಾವಣನ ತೋಳುಗಳೆಂಬ[3]ಸರ್ಪ[4]ಶರೀರಗಳನ್ನು ತಡೆಯುವುದರಲ್ಲಿ [5]ಹಾವು ಹಿಡಿಯುವವನಂತೆ ಆಚರಿಸುತ್ತಿದ್ದ ಲಾಂಗೂಲಮಂಡಲವುಳ್ಳವನೇ! ಕಥಂ=ಹೇಗೆತಾನೆ ಗತಃ ಅಸಿ=ಮೃತನಾದೆ? ಇತಿ=ಎಂಬುದಾಗಿ ಬಾಷ್ಪ+ಆವಿಲಮುಖಾಃ=ಕಣ್ಣೀರುತುಂಬಿದ ಮುಖವುಳ್ಳವರಾಗಿ ವಲೀಮುಖಾಃ=ವಾನರರು ರಾಮ+ಆಜ್ಞಯಾ=ರಾಮನ ಅಪ್ಪಣೆಯಿಂದ ತಸ್ಯ=ಆ ವಾಲಿಯ ಸರ್ವಂ=ಎಲ್ಲ ಪ್ರೇತಕೃತ್ಯಂ=ಉತ್ತರಕ್ರಿಯೆಗಳನ್ನೂ ಯಥಾ+ಅಭಿಪ್ರೇತಂ=ಯೋಗ್ಯರೀತಿಯಲ್ಲಿ ನಿರ್ವರ್ತಯಾಮಾಸುಃ=ನೆರವೇರಿಸಿದರು.

— *Sugrīva is consecrated king* —

१३. ततो जाम्बवत्प्रमुखा वलीमुखगणा दाशरथिनिदेशात्सुग्रीवं काञ्चनकलशोदकैरभ्यषिञ्चन् ।

Then, at the command of Rāma, hosts of monkeys headed by Jāmbavān consecrated Sugrīva with the waters poured from golden jars.

ತತಃ=ಬಳಿಕ ಜಾಂಬವತ್‌ಪ್ರಮುಖಾಃ=ಜಾಂಬವಂತನೇ ಮುಂತಾದ ವಲೀಮುಖಗಣಾಃ= ವಾನರ ಸಮೂಹಗಳು ದಾಶರಥಿ-ನಿದೇಶಾತ್= ಶ್ರೀರಾಮನ ಅಪ್ಪಣೆಯಿಂದ ಸುಗ್ರೀವಂ=ಸುಗ್ರೀವನಿಗೆ ಕಾಂಚನ-ಕಲಶ+ ಉದಕೈಃ= ಚಿನ್ನದ ಕಲಶಗಳಲ್ಲಿಟ್ಟ ನೀರುಗಳಿಂದ ಅಭಿ+ಅಷಿಂಚನ್= ಅಭಿಷೇಕಮಾಡಿದರು.

अभिषिक्ते तु सुग्रीवे रामश्यामपयोमुचा ।
अभिषेक्तुं स्थिता मेघास्तन्महीं महिषीमिव ॥ २० ॥

When Sugriva was consecrated (as king) by the dark cloud in the form of Rāma, (water-)clouds stood ready to consecrate the Earth as his queen.

ಸುಗ್ರೀವೇ= ಸುಗ್ರೀವನು ರಾಮ-ಶ್ಯಾಮ-[1]ಪಯೋಮುಚಾ= ರಾಮನೆಂಬ ಕಪ್ಪು[1]ಮೋಡದಿಂದ ಅಭಿಷಿಕ್ತೇ= ಅಭಿಷಿಕ್ತನಾಗಲಾಗಿ ಮೇಘಾಃ ತು= ಮೇಘಗಳಾದರೋ ತತ್+ಮಹೀಂ= ಆ ಸುಗ್ರೀವನ ಭೂಮಿಗೆ ಮಹಿಷೀಂ ಇವ=ಅವನ ರಾಣಿಗೋ ಎಂಬಂತೆ ಅಭಿಷೇಕ್ತುಂ= ಅಭಿಷೇಕಮಾಡಲು ಸ್ಥಿತಾಃ= (ಸಿದ್ಧವಾಗಿ) ಇದ್ದುವು. (ಅಂದರೆ ಮಳೆಗಾಲ ಪ್ರಾಪ್ತವಾಯಿತು). ॥ ೨೦ ॥

आर्यार्यान्वेषणा कार्या शरदीत्युक्तसंविदा ।
कपीन्द्रेणार्थितो रामः किष्किन्धावर्तनं प्रति ॥२१॥

Rāma was requested to enter Kiṣkindhā by the lord of the monkeys after giving the pledge — 'Sir, the search of the revered lady shall be made in autumn.' [21]

ಆರ್ಯ=ಎಲೌ ಆರ್ಯನೇ! (ಶ್ರೀರಾಮನೇ!) ಆರ್ಯಾ+ಅನ್ವೇಷಣಾ= ಆರ್ಯೆಯಾದ ಸೀತೆಯನ್ನು ಹುಡುಕುವ ಕೆಲಸವು ಶರದಿ= ಶರತ್ಕಾಲದಲ್ಲಿ ಕಾರ್ಯಾ=ಮಾಡಲ್ಪಡುತ್ತದೆ. ಇತಿ=ಎಂಬುದಾಗಿ ಉಕ್ತಸಂವಿದಾ= (ತನ್ನ) ನಿರ್ಧಾರವನ್ನು ಅರಿಕೆಮಾಡಿದ ಕಪೀಂದ್ರೇಣ= ವಾನರರಾಜನಾದ

ಸುಗ್ರೀವನಿಂದ ಕಿಷ್ಕಿಂಧಾವರ್ತನಂ ಪ್ರತಿ=ಕಿಷ್ಕಿಂಧೆಗೆ ಪ್ರವೇಶಿಸುವ ವಿಷಯ
ವಾಗಿ ರಾಮಃ=ಶ್ರೀರಾಮನು ಅರ್ಥಿತಃ=ಪ್ರಾರ್ಥಿಸಲ್ಪಟ್ಟನು. || ೨೧ ||

न योग्या नगरप्राप्तिरित्युक्तवति राघवे ।
सुग्रीवप्रार्थनाप्यासीद्भरतप्रार्थनासमा ॥ २२ ॥

When Rāghava replied — 'Getting into the city is not proper,' Sugriva's request also came to be on a par with Bharata's request. [22]

ನಗರಪ್ರಾಪ್ತಿಃ=ಪಟ್ಟಣಪ್ರವೇಶವು ಯೋಗ್ಯಾ ನ=(ತನಗೆ) ತಕ್ಕುದಲ್ಲ ಇತಿ=ಎಂದು ರಾಘವೇ=ಶ್ರೀರಾಮನು ಉಕ್ತವತಿ=ಹೇಳಲಾಗಿ ಸುಗ್ರೀವ-ಪ್ರಾರ್ಥನಾ ಅಪಿ=ಸುಗ್ರೀವನ ಪ್ರಾರ್ಥನೆಯೂ ಕೂಡ ಭರತಪ್ರಾರ್ಥನಾ-ಸಮಾ=ಭರತನ ಪ್ರಾರ್ಥನೆಗೆ ಸಮನಾಗಿ ಆಸೀತ್=ಆಯಿತು. || ೨೨ ||

*—Rainy season is described—*

दत्तार्जुनविकासेन धार्तराष्ट्रान्निरस्यता ।
तेन जीमूतकालेन देवकीनन्दनायितम् ॥ २३ ॥

By that cloudy season which had imparted blossoming to the Arjuna trees and which was driving out swans, the role of Devaki's son who cheered up Arjuna and destroyed the sons of Dhṛtarāṣṭra was played. [23]

ದತ್ತ+ಅರ್ಜುನ-ವಿಕಾಸೇನ=ಅರ್ಜುನವೃಕ್ಷಗಳ ಪುಷ್ಪಗಳ ಅರಳುವಿಕೆಯನ್ನುಂಟುಮಾಡಿದ್ದ (ಅರ್ಜುನನ ಮನೋಲ್ಲಾಸವನ್ನುಂಟುಮಾಡಿದ್ದ) ಧಾರ್ತರಾಷ್ಟ್ರಾನ್ = ಹಂಸವಿಶೇಷಗಳನ್ನು (ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳನ್ನು) ನಿರಸ್ಯತಾ = ಹೊರಗಟ್ಟುತ್ತಿದ್ದ ತೇನ = ಆ ಜೀಮೂತಕಾಲೇನ = ಮಳೆಗಾಲದಿಂದ ದೇವಕೀ-ನಂದನಾಯಿತಂ = ದೇವಕಿಯ ಮಗನಾದ ಶ್ರೀಕೃಷ್ಣನಂತೆ ಆಚರಿಸಲ್ಪಟ್ಟಿತು. || ೨೩ ||

अस्माकं[1] रूपलक्ष्मीमसकृदपहसत्यात्मकान्त्या तदास्
भर्तारं नः सुरेन्द्रं किमपि न गणयन्वालिनं द्राग्
इत्थं मत्वेव वैरं झटिति घनघटा राघवस्याहवोत्था-
माशामाशाश्च रुद्ध्वा स्तनितमिषमहासिंह[2]नादान्वितेनुः ॥

[1] आस्माकीं [2] नादं ततान

'He ridicules more than once the richness of our colour by his own splendour; let alone that. He has killed Vālin in no time, caring not for our master Devendra.'—Thus thinking, the arrays of clouds, having entertained a grudge as it were against Rāghava, gave out loud warriors' roars under the pretext of thunder, after suddenly blocking in revenge all the hopes of Rāma for battle, as also all the quarters of the sky. [24]

ಅಸ್ಮಾಕಂ=ನಮ್ಮ ರೂಪಲಕ್ಷ್ಮೀಂ=ರೂಪಸಂಪತ್ತಿಯನ್ನು ಆತ್ಮ-ಕಾಂತ್ಯಾ=ತನ್ನ ದೇಹಕಾಂತಿಯಿಂದ ಅಸಕೃತ್=ಅನೇಕಸಲ ಅಪಹಸತಿ=ಅಪಹಾಸ್ಯಮಾಡುತ್ತಾನೆ. ತತ್=ಅದು ಆಸ್ತಾಂ=ಇರಲಿ. ನಃ=ನಮ್ಮ ಭರ್ತಾರಂ=ಸ್ವಾಮಿಯಾದ ಸುರೇಂದ್ರಂ=ದೇವೇಂದ್ರನನ್ನು ಕಿಂ ಅಪಿ=ಸ್ವಲ್ಪವೂ ನ ಗಣಯನ್=ಲಕ್ಷ್ಯಮಾಡದೆ ವಾಲಿನಂ=ವಾಲಿಯನ್ನು ದ್ರಾಕ್=(ಹಿಂದುಮುಂದು ನೋಡದೆ) ಬೇಗ ಜಘಾನ-ಕೊಂದುಹಾಕಿದನು. ಇತ್ಥಂ=ಈ ಪ್ರಕಾರವಾಗಿ ವೈರಂ=ದ್ವೇಷವನ್ನು ಮತ್ವಾ=ನೆನೆದು ಝಟಿತಿ=ಶೀಘ್ರವಾಗಿ ಘನಘಟಾಃ=ಮೋಡಗಳ ಗುಂಪುಗಳು ಆಹವ+ಉತ್ಥಾಂ=ಯುದ್ಧದಿಂದುದ್ಭವಿಸಿದ ರಾಘವಸ್ಯ=ಶ್ರೀರಾಮನ ಆಶಾಂ=ಆಸೆಯನ್ನೂ ಚ=ಮತ್ತು ಆಶಾಃ=ದಿಕ್ಕುಗಳನ್ನೂ ರುದ್ಧ್ವಾ=ನಿರೋಧಿಸಿ ಸ್ತನಿತ-[1]ಮಿಷ-ಮಹಾಸಿಂಹನಾದಾನ್=ಗರ್ಜನೆಯ [1]ನೆಪದಿಂದ ದೊಡ್ಡ ಸಿಂಹನಾದಗಳನ್ನು ವಿತೇನುಃ=ಮಾಡಿದುವು. ॥೨೪॥

ಸುಗ್ರೀವನಿಂದ ಕಿಷ್ಕಿಂಧಾವರ್ತನಂ ಪ್ರತಿ=ಕಿಷ್ಕಿಂಧೆಗೆ ಪ್ರವೇಶಿಸುವ ವಿಷಯ ವಾಗಿ ರಾಮಃ=ಶ್ರೀರಾಮನು ಅರ್ಥಿತಃ=ಪ್ರಾರ್ಥಿಸಲ್ಪಟ್ಟನು. ॥ ೨೧ ॥

न योग्या नगरप्राप्तिरित्युक्तवति राघवे ।
सुग्रीवप्रार्थनाप्यासीद्भरतप्रार्थनासमा ॥ २२ ॥

When Rāghava replied — 'Getting into the city is not proper,' Sugrīva's request also came to be on a par with Bharata's request. [22]

ನಗರಪ್ರಾಪ್ತಿಃ=ಪಟ್ಟಣಪ್ರವೇಶವು ಯೋಗ್ಯಾ ನ=(ತನಗೆ) ತಕ್ಕುದಲ್ಲ ಇತಿ=ಎಂದು ರಾಘವೇ=ಶ್ರೀರಾಮನು ಉಕ್ತವತಿ=ಹೇಳಲಾಗಿ ಸುಗ್ರೀವ-ಪ್ರಾರ್ಥನಾ ಅಪಿ=ಸುಗ್ರೀವನ ಪ್ರಾರ್ಥನೆಯೂ ಕೂಡ ಭರತಪ್ರಾರ್ಥನಾ-ಸಮಾ=ಭರತನ ಪ್ರಾರ್ಥನೆಗೆ ಸಮನಾಗಿ ಆಸೀತ್=ಆಯಿತು. ॥ ೨೨ ॥

*—Rainy season is described—*

दत्तार्जुनविकासेन धार्तराष्ट्रान्निरस्यता ।
तेन जीमूतकालेन देवकीनन्दनायितम् ॥ २३ ॥

By that cloudy season which had imparted blossoming to the Arjuna trees and which was driving out swans, the role of Devaki's son who cheered up Arjuna and destroyed the sons of Dhṛtarāṣṭra was played. [23]

ದತ್ತ+ಅರ್ಜುನ-ವಿಕಾಸೇನ=ಅರ್ಜುನವೃಕ್ಷಗಳ ಪುಷ್ಪಗಳ ಅರಳುವಿಕೆಯನ್ನುಂಟುಮಾಡಿದ್ದ (ಅರ್ಜುನನ ಮನೋಲ್ಲಾಸವನ್ನುಂಟುಮಾಡಿದ್ದ) ಧಾರ್ತರಾಷ್ಟ್ರಾನ್ = ಹಂಸವಿಶೇಷಗಳನ್ನು (ಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳನ್ನು) ನಿರಸ್ಯತಾ = ಹೊರಗಟ್ಟುತ್ತಿದ್ದ ತೇನ = ಆ ಜೀಮೂತಕಾಲೇನ = ಮಳೆಗಾಲದಿಂದ ದೇವಕೀ-ನಂದನಾಯಿತಂ = ದೇವಕಿಯ ಮಗನಾದ ಶ್ರೀಕೃಷ್ಣನಂತೆ ಆಚರಿಸಲ್ಪಟ್ಟಿತು. ॥ ೨೩ ॥

अस्माकं[1] रूपलक्ष्मीमसकृदपहसत्यात्मकान्त्या तदास्तां
भर्तारं नः सुरेन्द्रं किमपि न गणयन्वालिनं द्राग्जघान ।
इत्थं मत्वेव वैरं झटिति घनघटा राघवस्याहवोत्था-
माशामाशाश्च रुद्ध्वा स्तनितमिषमहासिंह[2]नादान्वितेनुः ॥

[1] आस्माकीं [2] नादं ततान

'He ridicules more than once the richness of our colour by his own splendour; let alone that. He has killed Vālin in no time, caring not for our master Devendra.'—Thus thinking, the arrays of clouds, having entertained a grudge as it were against Rāghava, gave out loud warriors' roars under the pretext of thunder, after suddenly blocking in revenge all the hopes of Rāma for battle, as also all the quarters of the sky. [24]

ಅಸ್ಮಾಕಂ=ನಮ್ಮ ರೂಪಲಕ್ಷ್ಮೀಂ=ರೂಪಸಂಪತ್ತಿಯನ್ನು ಆತ್ಮ-ಕಾಂತ್ಯಾ=ತನ್ನ ದೇಹಕಾಂತಿಯಿಂದ ಅಸಕೃತ್=ಅನೇಕಸಲ ಅಪಹಸತಿ=ಅಪಹಾಸ್ಯಮಾಡುತ್ತಾನೆ. ತತ್=ಅದು ಆಸ್ತಾಂ=ಇರಲಿ. ನಃ=ನಮ್ಮ ಭರ್ತಾರಂ=ಸ್ವಾಮಿಯಾದ ಸುರೇಂದ್ರಂ=ದೇವೇಂದ್ರನನ್ನು ಕಿಂ ಅಪಿ=ಸ್ವಲ್ಪವೂ ನ ಗಣಯನ್=ಲಕ್ಷ್ಯಮಾಡದೆ ವಾಲಿನಂ=ವಾಲಿಯನ್ನು ದ್ರಾಕ್=(ಹಿಂದುಮುಂದು ನೋಡದೆ) ಬೇಗ ಜಘಾನ-ಕೊಂದುಹಾಕಿದನು. ಇತ್ಥಂ=ಈ ಪ್ರಕಾರವಾಗಿ ವೈರಂ=ದ್ವೇಷವನ್ನು ಮತ್ವಾ=ನೆನೆದು ಝಟಿತಿ=ಶೀಘ್ರವಾಗಿ ಘನಘಟಾಃ=ಮೋಡಗಳ ಗುಂಪುಗಳು ಆಹವ+ಉತ್ಥಾಂ=ಯುದ್ಧದಿಂದುದ್ಭವಿಸಿದ ರಾಘವಸ್ಯ=ಶ್ರೀರಾಮನ ಆಶಾಂ=ಆಸೆಯನ್ನೂ ಚ=ಮತ್ತು ಆಶಾಃ=ದಿಕ್ಕುಗಳನ್ನೂ ರುದ್ಧ್ವಾ=ನಿರೋಧಿಸಿ ಸ್ತನಿತ-[1]ಮಿಷ-ಮಹಾಸಿಂಹನಾದಾನ್=ಗರ್ಜನೆಯ [1]ನೆಪದಿಂದ ದೊಡ್ಡ ಸಿಂಹನಾದಗಳನ್ನು ವಿತೇನುಃ=ಮಾಡಿದುವು. ॥ ೨೪ ॥

उपचितजीवनधाराः सत्पथभाजो निरस्तसन्तापाः ।
भूषा इव नवमेघाः पौरस्त्यमहाबलाकुलिताः ॥ २५ ॥

Fresh clouds, whose watery showers had increased, which had occupied the sky and removed the heat of the sun, were agitated by the eastern wind just as the kings who had multiplied the avenues of life, who had adopted the righteous path and removed the distress ( of their subjects ), were perturbed by the vast army of Paulastya (Rāvaṇa). [25]

ಉಪಚಿತಜೀವನಧಾರಾಃ=ಜಲಧಾರೆಗಳನ್ನು ಹೆಚ್ಚಿಸಿದ್ದ (ದಾನೋದಕ ಧಾರೆಗಳು ಹೆಚ್ಚಿದ್ದ) (ಧರ್ಮಾಚರಣಾದಿಗಳಿಂದ ಆಯುಸ್ಸಿನ ದೈರ್ಘ್ಯವನ್ನು ಹೆಚ್ಚಿಸಿಕೊಂಡಿದ್ದ) ಸತ್ಪಥ-ಭಾಜಃ = ಆಕಾಶಮಾರ್ಗ ಸಂಚಾರಿಗಳಾದ (ಸನ್ಮಾರ್ಗಗಾಮಿಗಳಾದ) ನಿರಸ್ತಸಂತಾಪಾಃ=ಸಂತಾಪವನ್ನು ಪರಿಹರಿಸಿದ್ದ (ಆಶ್ರಿತರ ಮನಃಪರಿತಾಪವನ್ನು ಹೋಗಲಾಡಿಸಿದ್ದ) ಪೌರಸ್ತ್ಯ-[1]ಮಹಾಬಲ + ಆಕುಲಿತಾಃ= ಪೂರ್ವದಿಕ್ಕಿನಲ್ಲಿ ಎದ್ದ [1]ಗಾಳಿಯಿಂದ ಆಕುಲಗೊಂಡಿದ್ದ (ರಾವಣನ ಮಹಾಬಲದಿಂದ ವಿಹ್ವಲಗೊಂಡಿದ್ದ) ನವಮೇಘಾಃ = ಹೊಸ ಮೋಡಗಳು ಭೂಪಾಃ ಇವ= ರಾಜರುಗಳಂತೆ ಇದ್ದುವು. ॥ ೨೫ ॥

१४. तेन किल रघुपतिरतिमात्रप्रवृद्धमन्युः शतमन्युशरासनशारतरतारापथां [1]घनरवमुखरितहरिन्मुखाभोगां कदम्बवनपवना[2]कम्पनिराडम्बरकादम्बकुटुम्बामम्बुदकदम्बकवलिताम्बरां शिलीन्ध्रसंबन्धबन्धुरवसुन्धरां विकचकुटजनिचयकवचितमहारण्यां प्रावृषेण्यां प्रक्रियां प्रेक्षमाणो लक्ष्मणमिदमभाषत ।

At that the lord of Raghus became exceedingly angry; and beholding the display of the rainy season, in which the sky was variegated by the rainbow, and the regions extending up

to the horizons were noisy with the roars of thunder, flocks of *kalahamsa* birds were without free play owing to the blowing of the breeze from the kadamba trees, the sky was swallowed by clouds, the earth was lovely with the association of plantain flowers and the big forest had put on the armour of a mass of blooming jasmine flowers, he said to Lakṣmaṇa.—

ತೇನ = ಆ ವರ್ಷಾಸಮಯದಿಂದ ರಘುಪತಿಃ = ಶ್ರೀರಾಮನು ಅತಿಮಾತ್ರ-ಪ್ರವೃದ್ಧ - ಮನ್ಯುಃ = ತುಂಬ ಹೆಚ್ಚಿದ ಕೋಪವುಳ್ಳವನಾಗಿ ಶತಮನ್ಯು-ಶರಾಸನ-ಶಾರತರ-ತಾರಾಪಥಾಂ = ಇಂದ್ರನ ಧನುಸ್ಸಿನಿಂದ (ಕಾಮನ ಬಿಲ್ಲಿನಿಂದ) ತುಂಬ ವರ್ಣರಂಜಿತವಾದ ಆಕಾಶವುಳ್ಳ ಘನರವ-ಮುಖರಿತ-ಹರಿನ್ಮುಖ+ಆಭೋಗಾಂ=ಮೋಡಗಳ ಗರ್ಜನೆಯಿಂದ ಪ್ರತಿಧ್ವನಿಗೊಂಡ ದಿಗಂತದ ವೈಶಾಲ್ಯವುಳ್ಳ, ಕದಂಬವನ-ಪವನ+[1]ಆಕಂಪ-ನಿರಾಡಂಬರ-[2]ಕಾದಂಬ ಕುಟುಂಬಾಂ=ಕಾದಂಬ (ನೀಪ) ವೃಕ್ಷಗಳ ವನದ ಗಾಳಿಯ [1]ಸಂಚಾರದಿಂದ ಆಡಂಬರವಿಲ್ಲದ [2]ಕಲಹಂಸಗಳ ಜೋಡಿಗಳುಳ್ಳ, ಅಂಬುದ-ಕದಂಬ-ಕವಲಿತ+ಅಂಬರಾಂ=ಮೇಘಸಮೂಹಗಳಿಂದ ನುಂಗಲ್ಪಟ್ಟ (ಮುಚ್ಚಲ್ಪಟ್ಟ) ಆಕಾಶವುಳ್ಳ, ಶಿಲೀಂಧ್ರ-ಸಂಬಂಧ-ಬಂಧುರ-ವಸುಂಧರಾಂ=ಬಾಳೆಯ ಹೂವಿನ ಸಂಬಂಧದಿಂದ ಮನೋಹರವಾದ ಭೂಮಿಯುಳ್ಳ, ವಿಕಚ-[3]ಕುಟಜ-ನಿಚಯ-ಕವಚಿತ-ಮಹಾರಣ್ಯಾಂ = ಅರಳಿದ [3]ಕಾಡುಮಲ್ಲಿಗೆಯ ರಾಶಿಗಳಿಂದ ಕವಚ ತೊಟ್ಟಿದ್ದ (ಮುಚ್ಚಿಹೋಗಿದ್ದ) ಮಹಾರಣ್ಯವುಳ್ಳ, ಪ್ರಾವೃಷೇಣ್ಯಾಂ = ಮಳೆಗಾಲದಲ್ಲುಂಟಾಗುವ ಪ್ರಕ್ರಿಯಾಂ = ಪರಿಪಾಟಿಯನ್ನು ಪ್ರೇಕ್ಷಮಾಣಃ = ಗಮನಿಸಿ ನೋಡುತ್ತಾ ಲಕ್ಷ್ಮಣಂ=ಲಕ್ಷ್ಮಣನನ್ನು ಕುರಿತು ಇದಂ = ಈ (ಮುಂದಿನ) ಮಾತನ್ನು ಅಭಾಷತ=ಹೇಳಿದನು.—

अयं कालः कालप्रमथनगलाभैरभिनवै-
रहंयूनां यूनामपहरति धैर्यं जलधरैः ।

स्मराधारा [1]धारापरिचितजडा वान्ति सहसा ।
नभस्वन्तः स्वन्तः कथमिव वियोगः परिणमेत् ॥

[1] धारापरिचयजडा

"Through the fresh clouds which are of the same hue as that of the neck of S'iva (the destroyer of death), this season removes the courage of haughty youths. Winds which inflame love and are slovenly by the contact of showers blow all on a sudden. How at all would separation result in any good end ? [26]

ಅಯಂ = ಈಗ ಪ್ರಸಕ್ತವಾಗಿರುವ ಕಾಲಃ = ವರ್ಷಾಕಾಲವು [1]ಕಾಲಪ್ರಮಥನ-[2]ಗಲ + ಅಭ್ರೈಃ = [1]ಮೃತ್ಯುಂಜಯನ [2]ಕಂಠದ ಪ್ರಕಾಶವುಳ್ಳ ಅಭಿನವೈಃ = ಹೊಸದಾದ ಜಲಧರೈಃ = ಮೋಡಗಳ ಮೂಲಕ ಅಹಂಯೂನಾಂ=ಅಹಂಕಾರಿಗಳಾದ ಯೂನಾಂ=ಯುವಕರ ಧೈರ್ಯಂ=ಧೈರ್ಯವನ್ನು ಅಪಹರತಿ=ಅಪಹರಿಸಿಬಿಡುತ್ತಿದೆ. ಸ್ಮರ+ಆಧಾರಾಃ=ಮನ್ಮಥೋದ್ದೀಪಕಗಳಾದ ಧಾರಾಪರಿಚಿತಜಡಾಃ= ವಾರಿಧಾರೆಯ (ಮಳೆಯ) ಸಂಪರ್ಕದಿಂದ ಶೀತಲವಾದ ನಭಸ್ವಂತಃ=(ಮಳೆಗಾಲದ) ಗಾಳಿಗಳು ಸಹಸಾ=ಇದ್ದಕ್ಕಿದ್ದಂತೆ (ವೇಗವಾಗಿ) ವಾಂತಿ = ಬೀಸುತ್ತಿವೆ. (ಆದ್ದರಿಂದ) ವಿಯೋಗಃ = ವಿರಹಖೇದವು ಸ್ವಂತಃ=ಸುಖಾಂತವಾಗಿ ಕಥಂ ಇವ=ಹೇಗೆತಾನೆ ಪರಿಣಮೇತ್=ಪರಿಣಮಿಸೀತು ? ॥ ೨೬ ॥

महासमरसूचकः प्रतिदिशं मनोजन्मनो
मयूरगलकाहलीकलकलः समुज्जृम्भते ।
पयोदमलिने दिने परुषविप्रयोगव्यथां
नरेषु वनितासु वा दधति हन्त के का इति ॥ २७ ॥

The sound of the bugles in the form of the necks of peacocks is rising high in every direction, giving notice of the great battle of Cupid, (thus)

—'Lo! who are there among men or women that endure the severe pangs of separation when the day is darkened by clouds? [27]

ಪ್ರತಿದಿಶಂ=ದಿಕ್ಕುದಿಕ್ಕಿನಲ್ಲೂ ಮನೋಜನ್ಮನಃ=ಮನ್ಮಥನ ಮಹಾ-ಸಮರ-ಸೂಚಕಾಃ=ಮಹಾಯುದ್ಧಸೂಚಕಗಳಾದ ಮಯೂರ-ಗಲ-ಕಾಹಲೀ-ಕಲಕಲಃ=ನವಿಲಿನ ಕೊರಳೆಂಬ ಕಹಳೆಯ ಕೋಲಾಹಲವು ('ಕೇಕಾ'ಧ್ವನಿಯು) ಸಮುಜ್ಜೃಂಭತೇ=ಮೊಳಗುತ್ತಿದೆ; ಪಯೋದ-ಮಲಿನೇ=ಮೋಡದಿಂದ ಮಂಕಾದ ದಿನೇ=ದಿವಸದಲ್ಲಿ ಪರುಷ-ವಿಪ್ರಯೋಗ-ವ್ಯಥಾಂ=ದುಃಸಹವಾದ ವಿರಹವೇದನೆಯನ್ನು ನರೇಷು=ಪುರುಷರಲ್ಲಿ ಕೇ=ಯಾರು ವಾ=ಅಥವಾ ವನಿತಾಸು=ಹೆಂಗಸರಲ್ಲಿ ಕಾಃ=ಯಾರು ದಧತಿ=ಹೊಂದಿದ್ದಾರೆ? ಇತಿ=ಎಂದು. ॥ ೨೭ ॥

अम्भोधरोदरविनिर्गतवारिधारा-
संमर्दमांसलसमीरसमीर्यमाणैः ।
आमोदवीचिनिचयैः कुटजप्रसूनै-
राकाशमेतदवकाशविहीनमासीत् ॥ २८ ॥

This sky has become bereft of space on account of the jasmine flowers which are being opened by the breeze rendered dense by the contact of showers of water issuing from the interiors of clouds and the series of waves of fragrance. [28]

ಅಂಭೋಧರ+ಉದರ-ವಿನಿರ್ಗತ-ವಾರಿಧಾರಾ-ಸಂಮರ್ದ-[1]ಮಾಂಸಲ-[2]ಸಮೀರ-ಸಮೀರ್ಯಮಾಣೈಃ=ಮೋಡಗಳ ಒಳಭಾಗದಿಂದ ಹೊರಬಂದ ನೀರಿನ ಧಾರೆಗಳ ಒತ್ತಡದಲ್ಲಿ [1]ಬಲಗೊಂಡ [2]ಗಾಳಿಯಿಂದ ಚಲಿಸಲ್ಪಡುತ್ತಿರುವ ಆಮೋದ-ವೀಚಿ-ನಿಚಯೈಃ=ಸುವಾಸನೆಯ ಅಲೆಗಳ ಪರಂಪರೆಯುಳ್ಳ ಕುಟಜ-ಪ್ರಸೂನೈಃ=ಕಾಡುಮಲ್ಲಿಗೆ ಹೂಗಳಿಂದ ಏತತ್=ಈ ಆಕಾಶಂ=ಆಕಾಶವು ಅವಕಾಶವಿಹೀನಂ=ಅವಕಾಶವಿಲ್ಲದ್ದಾಗಿ ಆಸೀತ್=ಆಗಿಬಿಟ್ಟಿದೆ. ॥ ೨೮ ॥

